


# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 1221 (1436)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

ವಿಷಯ : ಉಡುಪಿ ಜಿಲ್ಲೆಯಲ್ಲಿ ಮರೀನಾ ನಿರ್ಮಾಣದ ಕುರಿತು

(ಅ) ಉಡುಪಿ ಜಿಲ್ಲೆಯಲ್ಲಿ ಮರೀನಾ ನಿರ್ಮಾಣಕ್ಕೆ ಸಂಬಂಧಿಸಿದಂತೆ ಕರಡು ಯೋಜನೆ ರೂಪಿಸಲಾಗಿದೆಯೇ; ಅದಕ್ಕೆ ತಗಲುವ ಅಂದಾಜು ವೆಚ್ಚ ಎಷ್ಟು; (ಯೋಜನೆಯ ಡಿಪಿಆರ್ ಮತ್ತು ಅಂದಾಜು ವೆಚ್ಚದ ಪ್ರತಿಯನ್ನು ಒದಗಿಸುವುದು)

(ಆ) ರಾಷ್ಟ್ರೀಯ ಜಲಹೆದ್ದಾರಿ 105 (ಉದ್ಯಾವರ ಹೊಳೆ) ಇಲ್ಲಿ ಒಳನಾಡು ಸರಕು ಸಾಗಾಣಿಕೆಗೆ ಸಂಬಂಧಿಸಿದಂತೆ ಅಭಿವೃದ್ಧಿಪಡಿಸುವ ಯಾವುದಾದರೂ ಯೋಜನೆಗಳು ರಾಜ್ಯ ಸರ್ಕಾರದ ಮುಂದಿದೆಯೇ; ಈ ಜಲಮಾರ್ಗವು ಉದ್ದೇಶಿತ ಮರೀನಾ ಯೋಜನೆಯ ಭಾಗವಾಗಿದೆಯೇ;

(ಇ) ಅದಾನಿ ಯುಪಿಸಿಎಲ್ ಪ್ರಸ್ತಾಪಿಸಿರುವ ವಿಸ್ತರಣಾ ಯೋಜನೆಯಲ್ಲಿ ಪ್ರಸ್ತಾಪಿತ ಹೆಚ್ಚುವರಿ ಜಾಗವು ಉದ್ಯಾವರ ಹೊಳೆಯ ದಂಡೆಯಲ್ಲಿ ಬರುತ್ತದೆಯೇ?